**GOVINA HAADU** - a popular poem on a cow by an unknown poet in Kannada. Published by : **Kannada Sahitya Parishattu**, Pampa Mahakavi Road, Chamarajapet, Bangalore - 560018 Pages : 20 + vi
Price: Rs. **20=00 : 2014**

ಮೊದಲನೇ ಮುದ್ರಣ : ೧೯೭೨
ಎರಡನೇ ಮುದ್ರಣ : ೧೯೭೮
ಮೂರನೇ ಮುದ್ರಣ : ೨೦೦೯
ನಾಲ್ಕನೇ ಮುದ್ರಣ : ೨೦೧೪
ಪ್ರತಿಗಳು : ೧೦೦೦
ಬೆಲೆ : ಇಪ್ಪತ್ತು ರೂಪಾಯಿಗಳು





ಮುಖಪುಟ ವಿನ್ಯಾಸ : ಫ್ಲವರ್ ಗ್ರಾಫಿಕ್

ಮುದ್ರಣ : ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸುವ ಆಶಯ ನಮ್ಮದು.

ಸಮಗ್ರ ಕನ್ನಡಿಗರ ಏಕೈಕ ಪ್ರಾತಿನಿಧಿಕ ಸಂಸ್ಥೆ ಎಂಬ ಹೆಗ್ಗಳಿಕೆಗೆ ಭಾಜನವಾಗಿರುವ, ೧೯೧೫ರಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತು, ಶತಮಾನೋತ್ಸವದ ಹೊಸ್ತಿಲಲ್ಲಿದೆ. ಕಳೆದ ೯೯ ವರ್ಷಗಳಿಂದಲೂ ಕನ್ನಡ ಗ್ರಂಥಗಳ ಪ್ರಕಟಣೆಯನ್ನು ನಿರಂತರವಾಗಿ ಮಾಡುತ್ತಾ ಬಂದಿರುವ ಪರಿಷತ್ತು ಸುಮಾರು ಒಂದು ಸಾವಿರದ ನಾಲ್ಕುನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿರುತ್ತದೆ. ಸರಿಸುಮಾರು ಒಂದು ಶತಮಾನದಷ್ಟು ಕಾಲಾವಧಿಯ ನಿರಂತರತೆ ಹಾಗೂ ಕೃತಿಗಳ ಮೌಲಿಕತೆಯ ದೃಷ್ಟಿಯಿಂದ ಇದೊಂದು ಅಪೂರ್ವ ದಾಖಲೆಯಾಗಿದೆ. ಕನ್ನಡ ಪ್ರಕಟಣಾ ಚರಿತ್ರೆಯಲ್ಲಂತೂ ಅನನ್ಯವೇ ಸರಿ.

'ಗೋವಿನ ಹಾಡು' ಕನ್ನಡ ಜನಮಾನಸದಲ್ಲಿ ಅಮರವಾಗಿರುವ ಪುಟ್ಟ ಕಾವ್ಯ; ಆದರೆ ಅದರ ಆಶಯ ಮಹತ್ತ್ವವಾದುದು.

ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಬಿ.ಎಂ.ಶ್ರೀ. ಅಚ್ಚುಕೂಟದ ಸಿಬ್ಬಂದಿವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಕಾರ ನೀಡಿದ ಪ್ರಕಟಣಾ ಸಮಿತಿಯ ಎಲ್ಲಾ ಸದಸ್ಯರಿಗೆ ನನ್ನ ಕೃತಜ್ಞತೆಗಳು.

ಪುಂಡಲೀಕ ಹಾಲಂಬಿ
ಅಧ್ಯಕ್ಷರು

# ಮುನ್ನುಡಿ

(ದ್ವಿತೀಯ ಮುದ್ರಣದ ಆವೃತ್ತಿಯದು)

ಭಾರತದ ಸ್ವಾತಂತ್ರ್ಯದ ಬೆಳ್ಳಿ ಹಬ್ಬದ ಸಂಬಂಧದಲ್ಲಿ, ತನ್ನ ತ್ರೈವಾರ್ಷಿಕ ಯೋಜನೆಯ ಅಂಗವಾಗಿ ಪರಿಷತ್ತು ಕೆಲವು ಜನಪ್ರಿಯ ಸಣ್ಣ ಗ್ರಂಥಗಳನ್ನು ಕನ್ನಡಿಗರಿಗೆ ಒದಗಿಸಲು ಆಲೋಚಿಸಿತು. ವಿದುರನೀತಿ, ಹರಿಭಕ್ತಿಸಾರ, ಸೋಮೇಶ್ವರ ಶತಕ, ನಿರಂಜನಸ್ತುತಿ ಮೊದಲಾದ ಪುಸ್ತಕಗಳನ್ನು ಪ್ರಕಟಿಸುವುದು, ಅವುಗಳನ್ನು ಸುಲಭ ಬೆಲೆಗೆ ಕೊಡುವುದು, ಅವು ಹೆಚ್ಚು ಜನರ ಕೈಸೇರುವಂತೆ ಮಾಡುವುದು ಪರಿಷತ್ತಿನ ಉದ್ದೇಶವಾಗಿತ್ತು. ಅದರಂತೆ ಸಾವಿರಾರು ಪ್ರತಿಗಳನ್ನು ಅಚ್ಚು ಮಾಡಿ ಜನಸಾಮಾನ್ಯರಿಗೆ ಒದಗಿಸಲಾಯಿತು. ಆ ಶಾಲಿನಲ್ಲಿ 'ಗೋವಿನ ಹಾಡು' ಪುಸ್ತಕ ಮೊದಲನೆಯದು. ಇದರ ಅಭ್ಯಾಸ ಕನ್ನಡ ಕಲಿಯುವ ಎಲ್ಲ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಾಲೆಯಿಂದಲೂ ಅನಿವಾರ್ಯವಾಗಿದೆ. ಆದರೆ ವಿದ್ಯಾರ್ಥಿಗಳ ಪಠ್ಯ ಪುಸ್ತಕಗಳಲ್ಲಿ ಆರಿಸಿದ ಪದ್ಯಗಳನ್ನು ಮಾತ್ರ ಪ್ರಕಟಿಸುವುದುಂಟು. ಈ ಕಥೆಯನ್ನು ಅಪೂರ್ವ ಛಂದಸ್ಸಿನಲ್ಲಿ ಶ್ರವಣ ಮಧುರವಾಗಿ ರಚಿಸಿದ ಅಜ್ಞಾತ ಕವಿಯ ಪ್ರತಿಭೆ ಅನೂನವಾದದ್ದು. ಅವನ ಕಾವ್ಯ ಜನರ ನಾಲಿಗೆಯ ಮೇಲೆ ನಲಿಯುತ್ತ ಕಲಿತ ಜನದ ಪ್ರತಿಭೆಗೆ ಒಳಗಾಗಿ ನೂರಾರು ಪಾಠಾಂತರಗಳನ್ನು ಪಡೆದಿರುವುದಲ್ಲದೆ ಹಲವಾರು ಪದ್ಯಗಳೂ ಮೂಲಕವಿಯ ಹೆಸರಿನಲ್ಲಿ ಸೇರಿಕೊಂಡು ಬೆಳೆಯುತ್ತ ಬಂದಿವೆ. ಈ ಪದ್ಯಗಳು ಮೂಲದಲ್ಲಿ ಎಷ್ಟಿದ್ದವು, ಪ್ರಕ್ಷಿಪ್ತವಾದವು ಎಷ್ಟು ಎಂಬುದನ್ನು ವಿವೇಚಿಸಿ ಹೇಳುವುದೇ ಕಷ್ಟವಾಗಿದೆ. ಹೀಗಿರುವಲ್ಲಿ ನಮ್ಮ ಜನಕ್ಕೆ ಮೂಲ ಏನಿರಬಹುದು ಎಂದು ಊಹಿಸುವುದಕ್ಕೆ ಒಂದು ಪ್ರಯತ್ನವೋ ಎಂಬಂತೆ ಈ ಪದ್ಯಗಳನ್ನು ಇಲ್ಲಿ ಅಚ್ಚು ಮಾಡಿದೆ. ಡಿ॥ ಡಿ. ಎಲ್. ನರಸಿಂಹಾಚಾರ್ಯರು ಇಂಥ ಪ್ರಯತ್ನವನ್ನು ಮೊದಲಿಗೇ ಮಾಡಿದ್ದರು. ಶ್ರೀ ಟಿ. ಕೇಶವಭಟ್ಟರು ಇಂಥ ಸಂಗ್ರಹವೊಂದನ್ನು ಪ್ರಕಟಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಕಡೆ ದೊರಕುವ ಪದ್ಯಗಳನ್ನು ವಿಶೇಷವಾಗಿ ಕೊಟ್ಟಿದ್ದಾರೆ. ಡಿ॥ ಡಿ. ಎಲ್. ಎನ್.

ಅವರು ಈ ಕಥಾ ಕಾವ್ಯವನ್ನು ಬರೆದವನು ಮದ್ದೂರಿನವನಿರಬೇಕು ಎಂದು ಊಹಿಸುತ್ತಾರೆ, ಕೊನೆಯ ಪಕ್ಷದಲ್ಲಿ ಬರುವ 'ಮದ್ದುರ ಶ್ರೀ ನಾರಸಿಂಹನೆ' ಸ್ತೋತ್ರದಿಂದ.

ನಮ್ಮ ಒಂದು ಸಂಪ್ರದಾಯದಂತೆ ನಮಗೆ ಕರ್ತೃವಿಗಿಂತ ಕೃತಿ ಮುಖ್ಯ. ಕವಿ ಅನಾಮಧೇಯನಾಗಿ ಅಜ್ಞಾತವಾಗಿ ಉಳಿಯುತ್ತಾನೆ. ಅವನ ಕೃತಿ ಅಜರಾಮರವಾಗಿ ಉಳಿಯುತ್ತದೆ. ಅದಕ್ಕೆ 'ಗೋವಿನ ಕಥೆ' ದೃಷ್ಟಾಂತ.

'ಸತ್ಯವೇ ನಮ್ಮ ತಾಯಿತಂದೆ' ಎಂಬ ಧ್ಯೇಯವನ್ನು ಪ್ರತಿಪಾದಿಸುವ ಈ ಕಥೆ ನಮ್ಮ ಜೀವನದ ಮೂಲ ಸೂತ್ರದ ವಿವರಣೆ ಎಂದೇ ಹೇಳಬಹುದು. ಕನ್ನಡ ಸಾಹಿತ್ಯದಲ್ಲೇ ಇದೊಂದು ಅಪೂರ್ವವಾದ ರಚನೆ. ಇದನ್ನು ಜನರಿಗೆ ಸುಲಭವಾಗಿ ದೊರಕುವಂತೆ ಮಾಡಿದ ಪರಿಷತ್ತಿನ ಪ್ರಯತ್ನ ಸಾರ್ಥಕವಾಗಿದೆ ಎಂದು ಭಾವಿಸುತ್ತೇನೆ.

ಬೆಂಗಳೂರು
೨೦-೧೦-೭೮

**ಹಂಪ ನಾಗರಾಜಯ್ಯ**
ಅಧ್ಯಕ್ಷ

# ಗೋವಿನ ಹಾಡು

ಧರಣಿ ಮಂಡಲ ಮಧ್ಯದೊಳಗೆ
ಮೆರೆವುದೈವತ್ತಾರು ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು ||೧||

ರೂಢಿಯೊಳಗರುಣಾದ್ರಿ ಗಿರಿಯು
ನಾಡಿನೊಳಗಿಹುದೊಂದು ಬೆಟ್ಟವು
ರೂಢಿಗಂಬರ ತುರುಕುವಂದದಿ
ನೋಡಲಾಶ್ಚರ್ಯವೆನಿಸಿತು ||೨||

ಸೃಷ್ಟಿಯೊಳಗರುಣಾದ್ರಿಗಿರಿಯು
ಬೆಟ್ಟದಾ ಬಳಸೇಳು ಗಿರಿಗಳು
ನೆಟ್ಟನೆ ಹನ್ನೆರಡು ಯೋಜನ
ದಟ್ಟೈಸಿತಾರಣ್ಯದಿ ||೩||

ನಾಗಸಂಪಿಗೆ ಮಾವು ನೇರಿಲು
ತೇಗ ಬೆನ್ನಂಗಿ ಬನ್ನಿ ಪಾದ್ರಿಯು
ಪಾಗೆ ತಿಂತ್ರಿಣಿ ಮತ್ತೆ ಬಿಲ್ವ
ತಾಗಿ ಮೆರೆವವರಣ್ಯದಿ ||೪||

ಆಲವರಳಿಯು ಅತ್ತಿಕಿತ್ತಳೆ
ಜಾಲಿ ತರಗಿಲು ಅಗಿಲು ಶ್ರೀಗಂಧ
ಮೇಲೆ ಪೂತಳೆ ಬಿದಿರು ಬೂರಗ
ಲೀಲೆಯೊಳು ವನವೊಪ್ಪಿತು ||೫||

ಎಕ್ಕೆ ಎಲಚಿಯು ಲಕ್ಕಿಗಿಡಗಳು
ಸೊಕ್ಕಿ ಮೆರೆವಾ ಸೀಗೆ ಮರಗಳು
ಉಕ್ಕಿ ಬೆಳೆಯುವ ನೆಲ್ಲಿಗಿಡಗಳು
ತೆಕ್ಕಯಿಸಿತಾರಣ್ಯದಿ ॥೬॥

ತೊಂಡೆ ತೊಟ್ಟಿಯು ಸೊಂಡೆಗಿಡ ಭೂ
ಮಂಡಲಾದೊಳು ಬೆಳೆವ ತೊಳಸಿಯು
ಉಂಡು ಸಂತಸಗೊಂಬ ನೇರಿಲು
ತಂಡ ತಂಡದಿ ಮೆರೆದುವು ॥೭॥

ಮೊಲ್ಲೆ ಮಲ್ಲಿಗೆ ಮುಗುಳುಸಂಪಿಗೆ
ಚೆಲ್ವ ಜಾಜಿಯು ಸುರುಗಿ ಸುರಹೊನ್ನೆ
ಎಲ್ಲಿ ನೋಡಲು ದವನ ಕೇತಕಿ
ಅಲ್ಲಿ ಮೆರೆದವರಣ್ಯದಿ ॥೮॥

ನಿಂಬೆ ನೇರಿಲು ಹಲಸು ಬೇಲವು
ಅಂಬರಕ್ಕೆ ಹರಿವ ಅಡಕೆಯು
ತುಂಬಿ ತುಳುಕುವ ತೆಂಗಿನಾ ಮರ
ಸಂಭ್ರಮಾದೊಳು ಮೆರೆದುವು ॥೯॥

ಆಡಸೋಗೆಯು ಕಾಡುನುಗ್ಗೆಯು
ರೂಢಿಯಿಂದಲಿ ಬೆಳೆವ ತಗ್ಗಿಯು
ಕೂಡಿ ಬೆಳೆಯುವ ಈಜಿಯಿಪ್ಪೆಯು
ರೂಢಿಯೊಳು ವನವೊಪ್ಪಿತು ॥೧೦॥

ವರಹ ಶಾರ್ದೂಲ ಸಿಂಹ ವಾರಣ
ಕರಡಿ ಕಾಡೆಮ್ಮೆ ಕಡವೆ ಮೃಗಗಳು
ಅರುಣ ಸಾರಗ ಚಿಕ್ಕ ಜಂಬುಕ
ಮರೆ ಹುಲ್ಲೆ ಸಿಂಗ ಮುಸುವನು ॥೧೧॥

ಗಿಳಿಯು ಕೋಗಿಲೆ ನವಿಲು ಕಾಡ್ಕೋಳಿ
ಪೊಳೆವ ಕಾಡ್ಪಕ್ಕಿ ಲಗಡೆ ರಣಹದ್ದು
ಸುಳಿವ ಕಾಳಿಂಗ ಹಂಸ ಚಕೋರನ
ಬಳಗವೊಪ್ಪಿತು ವನದೊಳು ॥೧೨॥

ಪಚ್ಚೆಹಕ್ಕಿಯು ಪಾರಿವಾಳವು
ಹೆಚ್ಚಿನಾ ಗೌಜೀನ ಹಕ್ಕಿಯು
ಕಚ್ಚಿ ಆಡುವ ಚಿಪಲೆ ಹಕ್ಕಿಯು
ರಚ್ಚಿಸಿ ಮೆರೆದವರಣ್ಯದಿ ॥೧೩॥

ಬಣ್ಣದುರುಳಿಯ ಬೆಟ್ಟದಾವರೆ
ಕಣ್ಣಿಗೆ ಪ್ರಿಯವಾದ ಸರ್ಪವು
ಬಣ್ಣ ಬಣ್ಣದ ಕೀರ ಮರಿಗಳು
ತಣ್ಣಗಿರ್ದವರಣ್ಯದಿ ॥೧೪॥

ಉರುಬಿನಿಂದಾ ಬರುವ ಕರಿಗಳು
ಎರಗಿ ಬರುತಿಹ ಗಂಡು ಮೃಗಗಳು
ತರುಬಿ ಬರುತಿಹ ಮಲೆಯ ಹೋರಿಯು
ಬಳಸಿ ಮೆರೆದವರಣ್ಯದಿ ॥೧೫॥

ಕೆಂಚ ನಾಯ್ಗಳು ಕಲವು ಕಾಡ್ಕೋಳಿ
ಪಂಚವರ್ಣದ ಪಾರಿವಾಳವು
ಸಂಚಿನೊಳ್ತಾ ಬರುವ ಕಿರುಬನು
ಮುಂಚೆ ಮೆರೆದವರಣ್ಯದಿ ॥೧೬॥

ಹೊಂಚಿ ಕಾಯುವ ತೋಳ ನರಿಗಳು
ವಂಚಿಸ್ಯೋಡುವ ಮೊಲನು ಕಡಗಳು
ರಂಜಿಸುತ್ತಿಹ ಕೋಣ ಮರಿಗಳು
ಬಂದು ಮೆರೆದವರಣ್ಯದಿ ॥೧೭॥

ಗಿರಿಯ ಪ್ರಾಂತ್ಯದಿ ಶೈಲಗೃಹದಿ
ಇರುವ ಮುನಿಗಳು ತಪಸಿ ಸಿದ್ಧರು
ಪರಮ ಮುನಿಜನ ಬ್ರಹ್ಮ ಋಷಿಗಳು
ಹರಿಯ ಧ್ಯಾನದೊಳಿರ್ದರು ॥೧೮॥

ಪೃಥ್ವಿಯೊಳಗರುಣಾದ್ರಿಗಿರಿಯು
ಒತ್ತಿನೊಳಗಿಹ ಪುಣ್ಯತೀರ್ಥವು
ಸತ್ಯಸಾಗರ ಮುಂದೆ ಗೌತಮಿ
ಉತ್ತಮಾ ನದಿ ಮೆರೆದವು ॥೧೯॥

ಗಿರಿಗಳೆಡೆಯೊಳು ಅಡವಿ ಮಧ್ಯದಿ
ತುರುವ ದೊಡ್ಡಿಯ ಮಾಡಿಕೊಂಡು
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು ॥೨೦॥

ಗೊಲ್ಲದೊಡ್ಡಿಯೊಳಿರುವ ಪಶುಗಳು
ಎಲ್ಲ ಬೆಟ್ಟದ ಮೇಲೆ ಮೇಯುತ
ಒಳ್ಳೆ ಹುಲ್ಲು ನೀರ್ಗಳಿಂದಲಿ
ಅಲ್ಲಿ ಮೆರೆದವರಣ್ಯದಿ ॥೨೧॥

ತಿರುಗಿ ಮಂದೆಗೆ ಬರುತ ಪಶುಗಳು
ನೆನೆದು ತಮ್ಮಾ ಕರುಗಳನ್ನು
ಪರಿದು ಲಂಘಿಸಿ ಚಿಮ್ಮಿ ನೆಗೆಯುತ
ಭರದಿ ಬಂದವು ದೊಡ್ಡಿಗೆ ॥೨೨॥

ತಮ್ಮ ತಾಯ್ಗಳ ಕಂಡು ಕರುಗಳು
ಅಮ್ಮನೆಂದೂ ಕೂಗಿ ನಲಿಯುತ
ಸುಮ್ಮಾನದೊಳು ಮೊಲೆಯಸುಂಡು
ನಿರ್ಮಲಾದೊಳು ಇದ್ದವು ॥೨೩॥

ಉದಯಕಾಲದೊಳೆದ್ದು ಗೊಲ್ಲನು
ನದಿಯ ಸ್ನಾನವ ಮಾಡಿಕೊಂಡು
ಮದನ ತಿಲಕವ ಫಣೆಯೊಳಿಟ್ಟು
ಚದುರಸಿಕೆಯನು ಹಾಕಿದ ॥೨೪॥

ಉಟ್ಟ ದಟ್ಟಿಯು ಪಟ್ಟೆ ಚಲ್ಲಣ
ತೊಟ್ಟ ಪದಕವು ಬಿಲ್ಲೆ ಸರಗಳು
ಕಟ್ಟ ಭಾಪುರಿ ಭುಜದ ಕೀರ್ತಿಯು
ಇಟ್ಟ ಮುದ್ರಿಕೆಯುಂಗುರ ॥೨೫॥

ಪಚ್ಚೆ ಕಡಗವು ಪವಳದಾಸರ
ಹೆಚ್ಚಿನಾ ಕಾಲ್ಗಡಗ ಗೆಜ್ಜೆಯು
ನಿಚ್ಚಿತಾನಂದದಲಿ ಮೆರೆದನು
ಮುತ್ತಿನಾ ಸರ ಪದಕವು ॥೨೬॥

ಇಟ್ಟ ಮುತ್ತಿನ ಒಂಟಿ ಬಾವುಲಿ
ಕಂಠಮಾಲೆ ಪದಕ ಸರಗಳು
ದಿಟ್ಟತನದಲಿ ಧರಿಸಿ ಮೆರೆದನು
ಗಂಟೆ ಮೊದಲಾದೊಡವೆಯ ॥೨೭॥

ನೀಲದೊಂಟಿಯು ತಾಳಿ ಚೌಕಳ
ಕಾಲ ಕಡಗವು ಮೇಲೆ ಭಾಪುರಿ
ನೀಲದುಂಗುರ ಕಾಲ ಸರಗಳು
ಬೋಟ ಧರಿಸಿಯೆ ಮೆರೆದನು ॥೨೮॥

ಚಂದ್ರಗಾವಿಯ ಅಂಗಿತೊಟ್ಟು
ಚಂದ್ರನೀಲದ ಪಾಗುಸುತ್ತಿ
ಚಂದ್ರಕಾಂತದ ದುಪಟಿಯನ್ನು
ಚಂದದಿಂದಲಿ ಹೊದ್ದನು ॥೨೯॥

ಗೊಲ್ಲ ಶೃಂಗಾರೀಸಿಕೊಂಡು
ಒಳ್ಳೆ ದುಕುಲಗಳನ್ನು ಪೊದ್ದು
ಬೆಳ್ಳಿಯುಂಡೆಯ ಕೈಲಿ ಪಿಡಿದು
ಎಲ್ಲ ಗೋವ್ಗಳ ಕರೆದನು ॥೩೦॥

ಎಳೆಯ ಮಾವಿನ ಮರದ ಕೆಳಗೆ
ಕೊಳಲನೂದುತ ಗೊಲ್ಲಗೌಡನು
ಬಳಸಿ ಬರುವ ತರುಗಳನ್ನು
ಬಳಿಗೆ ಕರೆದನು ಹರುಷದಿ ॥೩೧॥

ಪಾರ್ವತೀ ಲಕ್ಷ್ಮೀಯು ಬಾರೆ
ಸರಸ ಸದ್ಗುಣವನಿತೆ ಬಾರೆ
ಸರಸ್ವತಿಯ ಮಾಣಿಕವೆ ಬಾರೆಂದು
ಸರಸದಿಂ ಗೊಲ್ಲ ಕರೆದನು ॥೩೨॥

ಉದಯ ಭಾಸ್ಕರ ದೇವಿ ಬಾರೆ
ಚದುರ ಗುಣ ಸಂಪನ್ನೆ ಬಾರೆ
ಹೃದಯ ನಿರ್ಮಳೆ ನೀನು ಬಾರೆಂದು
ಹರುಷದೊಳು ಗೊಲ್ಲ ಕರೆದನು ॥೩೩॥

ಧರ್ಮದೇವಿ ನೀನು ಬಾರೆ
ಧರ್ಮಗುಣದಾ ತಾಯಿ ಬಾರೆ
ಧರ್ಮವತಿಯೇ ನೀನು ಬಾರೆಂದು
ಪ್ರೇಮದೊಳು ಗೊಲ್ಲ ಕರೆದನು ॥೩೪॥

ಗಂಗೆ ಬಾರೇ ಗೌರಿ ಬಾರೇ
ತುಂಗಭದ್ರೆ ನೀನು ಬಾರೇ
ಅಂಗನಾಮಣಿ ನೀನು ಬಾರೆಂದು
ಅಂಗಲಾಚಿ ಗೊಲ್ಲ ಕರೆದನು ॥೩೫॥

ಎಣಿಕೆ ಹುಲ್ಲೆ ಪರ್ಣದಾವು
ಉನ್ನಂತ ಬೆಟ್ಟದ ಕಂದ ಆವು
ಉನ್ನಂತವಹ ಕಪಿಲೆ ಗೋವ್ಗಳು
ಉನ್ನಂತವಾಗಿ ನಡೆದವು ॥೧೨॥

ಕರುವುಗಾಳು ಕಡಸುಗಾಳು
ಸರಿಯ ಪ್ರಾಯದ ಎತ್ತುಗಾಳು
ದುರುಳು ಪ್ರಾಯದ ಗೋವ್ಗಳೆಲ್ಲ
ತೆರಳಿದಾವಾರಣ್ಯಕೆ ॥೧೩॥

ಅಟ್ಟ ಬೆಟ್ಟದ ಕಿಬ್ಬಿಯೊಳಗೆ
ಇಟ್ಟೆಡೆಯ ಬೆಟ್ಟಾದ ನಡುವೆ
ದಟ್ಟೈಸಿದಾ ಸಸಿಗಳೆಡೆಯೊಳು
ಮುಟ್ಟಿ ಮೇದವು ಹುಲ್ಲನು ॥೧೪॥

ಅಕ್ಕಿಯಂತ ಹುಲ್ಲುಗಳನು
ಸಕ್ಕರೆಯಂದದಲಿ ಸವಿದು
ಅಕ್ಕರಿಂದಾಹಾರಗೊಂಡು
ಸೊಕ್ಕಿ ಸಂತಸಗೊಂಡವು ॥೧೫॥

ಹರಿದು ಮೇದ ಪಶುಗಳನು
ಕರೆದು ತಂದನು ಗೊಲ್ಲಗೌಡನು
ಕೊರಳ ಗಂಟೆಯು ಡಣಿರು ಡಣಿರೆನೆ
ಮರಳಿ ಬರುತಿರೆ ದೊಡ್ಡಿಗೆ ॥೧೬॥

ಪಚ್ಚಿದಾ ಮಲೆ ಮಧ್ಯದೊಳಗೆ
ಅರ್ಬುತಾನಂತೆಂಬ ವ್ಯಾಘ್ರನು
ಗಬ್ಬಿತನದೊಳು ಬೆಟ್ಟದಾ ಅಡಿ
ಕಿಬ್ಬಿಯೊಳು ತಾನಿರುವನು ॥೧೭॥

ಒಡಲಿಗೇಳು ದಿವಸದಿಂದ
ತಡೆದಾಹಾರವ ಬಳಲಿ ವ್ಯಾಘ್ರನು
ಅಡಗಿಕೊಂಡು ಗವಿಯ ಬಾಗಿಲ
ಹೊರನುಡಿಯ ಆಲಿಸುತಿರ್ದನು ॥೨೮॥

ಕೊರಳ ಗಂಟೆಯ ಧ್ವನಿಯು ಕರ್ಣಕೆ
ಎರಗಲಾಕ್ಷಣ ವ್ಯಾಘ್ರನೆದ್ದು
ಹರಿದು ಆಹಾರಗೊಂಬೆನೆನುತಲಿ
ಹೊರಹೊರಟು ತಾ ಬಂದಿತು ॥೨೯॥

ಸಿಡಿಲು ಘೋಷದಿ ಮೊರೆಯುತಾ ಹುಲಿ
ಘುಡುಘುಡಿಸಿ ಭೋರಿಡುತ ವ್ಯಾಘ್ರನು
ತುಡುಕಿಯೆರಗಿದ ರಭಸದಿಂದೊ
ಗ್ಗೊಡೆದವಾಗಾ ಗೋವ್ಗಳು ॥೩೦॥

ಅದರ ರಭಸಕೆ ನಿಲ್ಲಲರಿಯದೆ
ಕದುಬಿ ಕಮರಿಯ ಬಿದ್ದು ಹಸುಗಳು
ಹದರಿ ತಲ್ಲಣಗೊಂಡು ಹಸುಗಳು
ಚದರಿ ಓಡಿಹೋದವು ॥೩೧॥

ಚೆಲ್ಲಿವೋಡುವ ಹಸುಗಳನ್ನು
ಸಿಕ್ಕಲಿಲ್ಲಾವೆನುತ ವ್ಯಾಘ್ರನು
ಅಲ್ಲಿ ಕೋಪದಿ ಹಲ್ಲು ಕಡಿಯುತ
ಒಕ್ಕು ದಿಕ್ಕಿಗೆ ನೋಡಿತು ॥೩೨॥

ಕೋಮಲತೆಯಿಂ ನಲಿದು ನೆಗೆಯುತ
ಆ ಮಹಾಟವಿ ಮಧ್ಯದಲ್ಲಿ
ಪ್ರೇಮದಿಂದಲಿ ಬರುವ ಹಸುವನು
ಭೂಮಿಯೊಳು ಹುಲಿ ಕಂಡಿತು ॥೩೩॥

ಕನ್ನೆ ಮಗನ ಪಡೆದ ಪಶುವು
ತನ್ನ ಕಂದನ ನೆನೆದುಕೊಂಡು
ಪುಣ್ಯಕೋಟಿಯೆಂಬ ಪಶುವು
ಚೆನ್ನಾಗಿ ತಾ ಬರುತಿರೆ ||೫೪||

ಇಂದು ಎನಗಾಹಾರ ಸಂದಿತು
ಎನುತಲಾಗ ದುಷ್ಟ ವ್ಯಾಘ್ರನು
ಬಂದು ಬಳಸಿ ಅಡ್ಡಗಟ್ಟಿ
ಕೊಂಡಿತಾಗ ಪಶುವನು ||೫೫||

ಹೊಲನ ಗದ್ದೆಯ ಹಾಳುಮಾಡಿದೆ
ಬೆಳೆದ ಪೈರನು ಸವಿದು ಕೆಡಿಸಿದೆ
ಬಳಿಕ ಎನ್ನಯ ಗವಿಯ ಬಳಿಗೆ
ತಳುಗದೇ ನೀ ಬಂದೆಯಾ ||೫೬||

ಎಂದು ಹುಲಿಯು ಅಡ್ಡಗಟ್ಟಿ
ಹಿಂದೆ ಮುಂದಿಹ ಪಶುಗಳೆಲ್ಲ
ಒಂದಕೊಂದು ಭಯದೊಳೋಡಿ
ಮುಂದೆ ದೊಡ್ಡಿಗೆ ಬಂದವು ||೫೭||

ಪುಣ್ಯಕೋಟಿ ಎಂಬ ಪಶುವನು
ತಾನು ತಿಂದೇನೆಂದು ಹುಲಿಯು
ಚೆನ್ನಗೋವನು ಅಡ್ಡಗಟ್ಟಿ
ತಿನ್ನ ಯತ್ನೀಕರಿಸಿತು ||೫೮||

ಖೂಳ ಹುಲಿಯು ಅಡ್ಡಗಟ್ಟಿ
ಜೀಳ ಹೊಯ್ದೆನು ನಿನ್ನ ನೆನುತಲಿ
ಸೀಳಿ ಬಿಸುಡುವೆ ಬೇಗವೆನುತ
ಪ್ರಳಯವಾಗಿಯೆ ಕೋಪಿಸೆ ||೫೯||

ಹಾಳು ಮಾಡುವ ಗರತಿಯಲ್ಲ
ಬೀಳು ಮಾಡುವ ಗೈಮೆಯಲ್ಲ
ಬಾಳುವಂತೆ ಮಾಳ್ಪೆ ಧರೆಯೊಳು
ಕೇಳಯ್ಯ ಹುಲಿರಾಯನೆ ॥೬೦॥

ನಾನು ಮೆಟ್ಟಿದ ಭೂಮಿ ಬೆಳೆವುದು
ಧಾನ್ಯಧನಗಳುಂಟು ಮಾಡುವೆ
ನಾನೆ ಕ್ಷೀರವ ಕೊಡುವೆ ನಿತ್ಯವು
ಮಾನವರಿಗುಪಕಾರಿಯು ॥೬೧॥

ಅಡವಿಯೊಳಗಣ ಹುಲ್ಲ ಮೇಯುವೆ
ಮಡುವಿನೊಳಗಣ ನೀರ ಕುಡಿಯುವೆ
ಒಡೆಯನಾಜ್ಞೆಯಿಂದಲಿರುವೆನು
ಕಡೆಹಾಯಿಸು ಹುಲಿರಾಯನೆ ॥೬೨॥

ಉತ್ತರಾವನು ಕೊಡಲು ಹುಲಿಯು
ಮತ್ತೆ ಕೋಪದಿ ರೌದ್ರತಾಳಿ
ಕತ್ತ ಮುರಿವೆನು ಕಚ್ಚಿ ಒದರುವೆ
ರಕ್ತ ಹೀರುವೆನೆಂದಿತು ॥೬೩॥

ಒಂದು ಬಿನ್ನಹ ಹುಲಿಯರಾಯನೆ
ಕಂದನೈದೆನೆ ಮನೆಯ ಒಳಗೆ
ಒಂದು ನಿಮಿಷದಿ ಮೊಲೆಯ ಕೊಟ್ಟು
ಬಂದು ನಾನಿಲ್ಲಿ ನಿಲ್ಲುವೆ ॥೬೪॥

ಹಸಿದ ವೇಳೆಗೆ ಸಿಕ್ಕಿದೊಡವೆಯ
ವಶವಮಾಡಿಕೊಳ್ಳದೀಗ
ಹುಸುಳಿಹೋದರೆ ನೀನು ಬರುವೆಯ
ಹಸನಾಯಿತೀಗೆಂದಿತು ॥೬೫॥

ಮುನ್ನ ಪಾಂಡವ ಸತಿಯು ಹುಸಿದು
ತನ್ನ ನಿಜವನು ತಪ್ಪಿ ನಡೆದಳು
ನಿನ್ನ ನಂಬುವರಾರು ಈಗ
ನಿನ್ನ ನಾ ಬಿಡೆನೆಂದಿತು ॥೬೬॥

ಮೂರು ಮೂರ್ತಿಗಳಾಣೆ ಬರುವೆನು
ಸೂರ್ಯಚಂದ್ರಮರಾಣೆ ಬರುವೆನು
ಧಾರುಣೀ ದೇವಿಯಾಣೆ ಬರುವೆನು
ಎಂದು ಭಾಷೆಯ ಮಾಡಿತು ॥೬೭॥

ಬರುವೆನೆಂದು ಭಾಷೆ ಮಾಡಿ
ತಪ್ಪೆನೆಂದಾ ಪುಣ್ಯ ಕೋಟಿಯು
ಒಪ್ಪಿಸಲೊಡಂಬಟ್ಟು ವ್ಯಾಘ್ರನು
ಅಪ್ಪಣೆಯ ತಾ ಕೊಟ್ಟಿತು ॥೬೮॥

ಅಲ್ಲಿಂದ ಕಳುಹಿಸಿಕೊಂಡು
ನಿಲ್ಲದೆ ದೊಡ್ಡಿಗೆ ಬಂದು
ಚೆಲ್ವ ಮಗನನು ಕಂಡು ಬೇಗ
ಅಲ್ಲಿ ಕೊಟ್ಟಿತು ಮೊಲೆಯನು ॥೬೯॥

ಮಗನೆ ಬಾರೊ ಮೊಲೆಯ ಕುಡಿಯೊ
ಹೇಗೆ ಬದುಕಿಯೊ ಏನನರಿಯೆ
ಬೇಗ ಬಾರೊ ಕಂದ ಎನುತಲಿ
ಮಗನ ನೋಡಿಯೆ ಎಂದಳು ॥೭೦॥

ಕಟ್ಟಕಡೆಯಲಿ ಮೇಯದಿರು
ಬೆಟ್ಟದೊತ್ತಿಗೆ ಹೋಗದಿರು
ದುಷ್ಟ ವ್ಯಾಘ್ರಗಳುಂಟು ಅಲ್ಲಿ
ನಟ್ಟನಡುವೆ ಬಾರಯ್ಯನೆ ॥೭೧॥

ಇಂದು ಒಂದು ದುಷ್ಟ ವ್ಯಾಘ್ರನು
ತಿಂದೆನೆನುತಲಿ ಬಂದಿತಯ್ಯ
ಕಂದ ನಿನಗೆ ಮೊಲೆಯ ಕೊಡುವೆ
ನೆಂದು ಬಂದೆನು ದೊಡ್ಡಿಗೆ ॥೭೨॥

ಕೊಂದೆನೆಂಬ ದುಷ್ಟ ವ್ಯಾಘ್ರಗೆ
ಚೆಂದದಿಂದ ಭಾಷೆಯಿತ್ತು
ಕಂದ ನಿನ್ನನು ನೋಡಿ ಪೋಗುವೆ
ನೆಂದು ಬಂದೆನು ದೊಡ್ಡಿಗೆ ॥೭೩॥

ಅಮ್ಮ ನೀನು ಸಾಯಲೇತಕೆ
ಸುಮ್ಮನಿರು ನೀ ಎಲ್ಲಾರಹಾಗೆ
ತಮ್ಮ ತಾಯಿಗೆ ಪೇಳಿ ಕರುವು
ಸುಮ್ಮಾನವಡಗಿ ನಿಂದಿತು ॥೭೪॥

ಕೇಳಿ ಮಗನ ಬುದ್ಧಿಯನ್ನು
ತಾಳಿ ಹರುಷವ ಸತ್ಯವೆಂದು
ಬಾಳಿ ಬದುಕುವ ಭಾಗ್ಯ ನಿನ್ನದು
ಮುಂದರಿತು ನೀ ಬಾಳೈಯಾ ॥೭೫॥

ಕೊಟ್ಟ ಭಾಷೆಗೆ ತಪ್ಪಲಾರೆನು
ಕೆಟ್ಟ ಯೋಚನೆ ಮಾಡಲಾರೆನು
ನಿಷ್ಠೆಯಿಂದಲಿ ಪೋಪೆನಲ್ಲಿಗೆ
ಕಟ್ಟಕಡೆಗಿದು ಖಂಡಿತ ॥೭೬॥

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಸರ್ವ ಬಳಗವು
ಸತ್ಯವಾಕ್ಯಕೆ ತಪ್ಪಿದರೆ
ಅಚ್ಯುತಾ ಹರಿ ಮೆಚ್ಚನು ॥೭೭॥

ಕೊಟ್ಟ ಭಾಷೆಗೆ ತಪ್ಪಿದಾರೆ
ಸೃಷ್ಟಿಯೊಳು ಶ್ರೀಹರಿಯು ಮೆಚ್ಚನು
ಎಷ್ಟು ಕಾಲ ಇರುವುದೀ ಕಾಯ
ಕಟಕಟಾ ಕಂದಯ್ಯನೆ ॥೨೮॥

ಆರ ಮೊಲೆಯಾ ಕುಡಿಯಲಮ್ಮ
ಆರ ಸೇರಿ ಬದುಕಲಮ್ಮ
ಆರ ಬಳಿಯಲಿ ಮಲಗಲಮ್ಮ
ಆರು ಎನಗೆ ಹಿತವರು ॥೨೯॥

ಅಮ್ಮಗಳಿರಾ ಅಕ್ಕಗಳಿರಾ
ಎನ್ನ ತಾಯಿಯೊಡಹುಟ್ಟುಗಳಿರಾ
ನಿಮ್ಮ ಕಂದನೆಂದು ಕಂಡಿರಿ
ತಬ್ಬಲಿ ಮಗನೈದನೆ ॥೩೦॥

ಮುಂದೆ ಬಂದರೆ ಹಾಯದಿರಿ
ಹಿಂದೆ ಬಂದರೆ ಒದೆಯದಿರಿ
ನಿಮ್ಮ ಕಂದನೆಂದು ಕಂಡಿರಿ
ತಬ್ಬಲಿ ಮಗನೈದನೆ ॥೩೧॥

ಅಮ್ಮ ಕೇಳ್ ಪುಣ್ಯಕೋಟಿಯೆ
ನೀನು ಹೋಗಿ ಸಾಯಲೇತಕೆ
ಬಳಗವೆಲ್ಲವು ಕೂಡಿ ನಿನ್ನ
ಸಂಗಡಲೆ ನಾವ್ ಬರುವೆವು ॥೩೨॥

ಅಮ್ಮ ನೀವು ಎನ್ನ ಸಂಗಡ
ಬರುವುದೀಗ ಉಚಿತವಲ್ಲ
ಮುನ್ನ ನಾನು ಪಡೆದ ಫಲವಿದು
ಎನ್ನ ಬಿಡುವುದೆ ಎಂದಿತು ॥೩೩॥

ಅಮ್ಮ ಕೇಳೆ ಪುಣ್ಯಕೋಟಿಯೆ
ನಿನ್ನ ಕಂದನೆ ನಮ್ಮ ಕಂದನು
ನಿನ್ನ ಮನದೊಳು ಖೇದವೇತಕೆ
ನಿರ್ಮಲಾದೊಳಿರಮ್ಮನೆ ||೮೪||

ಅಮ್ಮ ನೀವು ಎಲ್ಲರಿರಲು
ಎನ್ನ ಮನದೊಳು ಖೇದವೇತಕೆ
ನಿಮ್ಮ ಕಂದನೆಂದು ಕೊಂಡಿರಿ
ತಬ್ಬಲಿ ಮಗನ್ನೈದನೆ ||೮೫||

ತಬ್ಬಲಿಯಾದೆಲೊ ಮಗನೆ
ಹೆಬ್ಬುಲಿಯ ಬಾಯಿಗೆ ಹೋಗುವೆನು
ಇಬ್ಬರಾ ಋಣ ತೀರಿತೆಂದು
ತಬ್ಬಿಕೊಂಡಳು ಕಂದನ ||೮೬||

ಅಮ್ಮನೆಂದು ಕರೆವ ಬಾಯಲಿ
ಮಣ್ಣಹಾಕಿದ ಶಿವನು ಎನುತಲಿ
ಎನ್ನ ಪುಣ್ಯದ ಭಾಗ್ಯವನ್ನು
ಯಾರಿಗೆಯು ನಾನುಸುರಲಿ ||೮೭||

ಎನ್ನ ಬಸುರಲಿ ಏಕೆ ಹುಟ್ಟಿದೆ
ಅನ್ಯಕಾಲ ಸಾವೆ ನಾನು
ಇನ್ನು ಅಮ್ಮನೆನುತ ಯಾರನು
ಎನ್ನ ಪ್ರೇಮದಿ ಕರೆಯಲಿ ||೮೮||

ಕಂದ ನಿನಗೆ ದುಃಖವೇತಕೆ
ಚಂದದಿಂದ ಬಾಳು ಧರೆಯೊಳು
ಮುನ್ನ ಎನ್ನದ ಪಡೆದ ಫಲವಿದು
ಎನ್ನ ಬಿಡುವುದೆ ಎಂದಿಗೂ ||೮೯||

ಕಂದನೀಗೆ ಬುದ್ಧಿ ಹೇಳಿ
ಬಂದಳಾಗ ಪುಣ್ಯಕೋಟಿಯು
ಚೆಂದದಿಂದ ಪುಣ್ಯನದಿಯೊಳು
ನಿಂದು ಸ್ನಾನವ ಮಾಡಿತು ॥೯೦॥

ಗೋವು ಸ್ನಾನವ ಮಾಡಿಕೊಂಡು
ಗವಿಯ ಬಾಗಿಲ ಪೊಕ್ಕು ನಿಂತು
ಸಾವಕಾಶವ ಮಾಡದಂತೆ
ವ್ಯಾಘ್ರರಾಯನ ಕರೆದಳು ॥೯೧॥

ಅಣ್ಣ ಬಾರೋ ಹುಲಿಯ ರಾಯನೆ
ಹಸಿದೆಯೆಲ್ಲೋ ದೋಷ ಬಂದಿತು
ಎನ್ನ ಆಹಾರವನು ಬೇಗನೆ
ಕೊಳ್ಳೆಲೋ ಹುಲಿರಾಯನೆ ॥೯೨॥

ಖಂಡವಿದೆ ಕೊ ರಕ್ತವಿದೆ ಕೊ
ಗುಂಡಿಗೆಯ ಕೊಬ್ಬಾಗಳಿದೆ ಕೋ
ಉಂಡು ಸಂತಸಗೊಂಡು ನೀ ಭೂ
ಮಂಡಲದೊಳು ಬಾಳಯ್ಯನೆ ॥೯೩॥

ಪುಣ್ಯಕೋಟಿಯು ಬಂದು ನುಡಿಯೆ
ತನ್ನ ಮನದೊಳು ಹುಲಿಯರಾಯನು
ಕನ್ನೆಯಿವಳನು ಕೊಂದು ತಿಂದರೆ
ಎನ್ನ ನರಹರಿ ಮೆಚ್ಚನು ॥೯೪॥

ಎನ್ನ ಒಡಹುಟ್ಟಕ್ಕ ನೀನು
ನಿನ್ನ ತಿಂದು ನಾನೇನ ಪಡೆವೆನು
ನಿನ್ನ ಪಾದದ ಮೇಲೆ ಬಿದ್ದು
ಎನ್ನ ಪ್ರಾಣವ ಬಿಡುವೆನು ॥೯೫॥

ಮುನ್ನ ನೂರು ಗೋವ ಕೊಂದ
ಅನ್ಯಕಾರಿ ಪಾಪಿ ನಾನು
ಇನ್ನು ಇರಿಸಲು ಏಕೆ ಪ್ರಾಣವ
ಬಿಡುವೆನೆಂದು ಪೇಳಿತು ॥೯೬॥

ಅಮ್ಮ ನೀನು ಸತ್ಯವಂತೆಯು
ನಿನ್ನ ದರುಶನ ಮಾತ್ರದಿಂದಲಿ
ನಾನು ಪೂರ್ವದಿ ತಂದ ಫಲವು
ಇಂದು ಪರಿಹರವಾಯಿತು ॥೯೭॥

ಯಾಕಯ್ಯ ಹುಲಿರಾಯ ಕೇಳು
ಜೋಕೆಯಿಂದಲಿ ಎನ್ನನೊಲ್ಲದೆ
ನೂಕಿ ನೀನು ಸಾಯಲೇತಕೆ
ಬೇಕೆಂದು ನಾ ಬಂದೆನು ॥೯೮॥

ನಿನ್ನ ಪ್ರಾಣವ ತೊರೆಯಲೇತಕೆ
ಕನ್ನೆಯೆನ್ನನು ತಿಂದು ಬದುಕದೆ
ಮುನ್ನ ನಿನ್ನಯ ತೃಷೆಯ ಸಲಹಿಕೊ
ಪನ್ನಗ ಶಯನೀಗೆ ಪ್ರಿಯವು ॥೯೯॥

ಪುಣ್ಯಕೋಟಿಯು ಮಾತ ಕೇಳಿ
ಕಣ್ಣಿನೊಳಗೆ ನೀರ ಸುರಿಯುತ
ಅನ್ಯಕಾರಿಯು ತಾನು ಎನುತಲಿ
ತನ್ನ ಮನದೊಳು ಧ್ಯಾನಿಸಿ ॥೧೦೦॥

ಮೂರು ಮೂರ್ತಿಗೆ ಕೈಯ ಮುಗಿದು
ಸೇರಿ ಎಂಟು ದಿಕ್ಕ ನೋಡಿ
ಹಾರಿ ಅಕಾಶಕ್ಕೆ ನೆಗೆದು
ತನ್ನ ಪ್ರಾಣವ ಬಿಟ್ಟಿತು ॥೧೦೧॥

ಹರಿಯು ಮೆಚ್ಚಿದ ಹರನು ಮೆಚ್ಚಿದ
ಬ್ರಹ್ಮದೇವನು ತಾನು ಮೆಚ್ಚಿದ
ಸುರರು ಪೂಮಳೆಗರೆದು ಬೇಗದಿ
ಕರುಣದಿಂದಲಿ ಇರುವರು ॥೧೦೨॥

ಬ್ರಹ್ಮ ಪ್ರಾಣವ ಕರೆದುಕೊಂಡ
ಹರನು ಪುಲಿಯ ಚರ್ಮ ಪೊದ್ದನು
ಹರನು ಹಸುವನು ಮನ್ನಿಸಿಯೇ ಬೇಗ
ತಿರುಗಿ ಕಳುಹಿದ ದೊಡ್ಡಿಗೆ ॥೧೦೩॥

ಆಗ ತಮ್ಮಾ ಬಳಗವೆಲ್ಲಾ
ಬೇಗದಿಂ ಸಂತೋಷಗೊಂಡು
ಹೇಗೆ ಬಂದೆಯೆ ಪುಣ್ಯಕೋಟಿಯೆ
ಈಗ ನೀನತಿ ಶೀಘ್ರದಿ ॥೧೦೪॥

ಪುಲಿಗೆ ಮೋಕ್ಷವ ಕೊಟ್ಟು ಶಿವನು
ಸಲಹಿ ಎನ್ನನು ಬಿಡಿಸಿದಾನು
ನಲಿದು ಬಂದೆನು ಮರಳಿ ದೊಡ್ಡಿಗೆ
ಗೆಲುವಿನಿಂದಲಿ ಈಗಲು ॥೧೦೫॥

ಎಂದ ವಾಕ್ಯವ ಕೇಳಿ ಪಶುಗಳು
ಚೆಂದದಿಂದ ನಲಿದು ನೆಗೆಯುತ
ಇಂದುಧರ ಅರವಿಂದನಾಭ ಗೋ
ವಿಂದ ಎನುತಲಿ ನಲಿದವು ॥೧೦೬॥

ಗೊಲ್ಲಗೌಡನು ತಾನು ಬಂದು
ಪುಣ್ಯಕೋಟಿಯ ಪಾದಕೆರಗಿದ
ಉನ್ನತದ ಸೌಭಾಗ್ಯವೀಯೆಂದು
ಚೆನ್ನಾಗಿ ತಾ ಕೇಳಿದ ॥೧೦೭॥

ಪುಣ್ಯಕೋಟಿಯು ನಲಿದು ಕರುವಿಗೆ
ಪುಣ್ಯಕಾರಿ ಎನುತ ಬೇಗದಿ
ಚೆನ್ನ ಗೌಡನ ಕಂಡು ತಾನು
ಉನ್ನತಾದಿಂದೆಂದಿತು ॥೧೦೮॥

ಎನ್ನ ವಂಶದ ಗೋವ್ಗಳೊಳಗೆ
ನಿನ್ನ ವಂಶದ ಗೊಲ್ಲರೊಳಗೆ
ಮುನ್ನ ಸಂಕ್ರಾಂತಿ ಹಬ್ಬದೊಳಗೆ
ಚೆನ್ನ ಕೃಷ್ಣನ ಭಜಿಸಿಯೆ ॥೧೦೯॥

ಪಾಲು ಪೊಂಗಲನಿಕ್ಕಿಸಯ್ಯ
ಬಾಲ ಗೋವ್ಗಳ ಕೂಡಿ ಸಾಗಲು
ಲೋಲ ಕೃಷ್ಣನು ನಿಮಗೆ ಒಲಿವನು
ಪಾಳಿಸೆನ್ನಯ ವಾಕ್ಯವಾ ॥೧೧೦॥

ಪುಣ್ಯಕೋಟಿಯ ಮಾತಕೇಳಿ
ಗೊಲ್ಲಗೌಡನು ತಾನು ಬೇಗದಿ
ಪುಣ್ಯ ನದಿಯೊಳು ಮಿಂದು ಬಂದು
ಆಗ ಹಬ್ಬವ ಮಾಡಿದ ॥೧೧೧॥

ನಮ್ಮ ವಂಶಕೆ ವರುಷಕೊಂದು
ಸಂಕರಾತ್ರಿಯ ಹಬ್ಬದೊಳಗೆ
ಪಾಲು ಪೊಂಗಲ ಮಾಳ್ಪೆವೆಂದು
ಆಗ ಹಬ್ಬವ ಮಾಡಿದ ॥೧೧೨॥

ಗೋವು ಹೇಳಿದ ಪುಣ್ಯ ಕಥೆಗಳ
ಹೇಳಿದವರಿಗೆ ಕೇಳಿದವರಿಗೆ
ಈವ ಅಚ್ಯುತ ಸೌಭಾಗ್ಯ ಸಂಪದ
ಆವ ಕಾಲಕೆ ತೆಗೆಯದ ॥೧೧೩॥

ಪದ್ಮನಾಭನೆ ಪರಂಧಾಮನೆ
ಮದ್ದುರ ಶ್ರೀನಾರಸಿಂಹನೆ
ಮುದ್ದು ವರಗಳ ಕೊಡುವ ನಿಮಗೆಯು
ನಮೋ ನಮೋ ಮಂಗಳಂ ॥೧೧೪॥



ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸಿದ ಮೇಲೆ ಅವುಗಳ ಮಾರಾಟದ ಪ್ರಮಾಣ ಹೆಚ್ಚುತ್ತಿರುವುದನ್ನು ಕಂಡು ನನಗೆ ಸಂತೋಷವಾಗಿದೆ. ಓದುಗರು ಬಯಸುವ ಪುಸ್ತಕಗಳನ್ನು ಅವರ ಕೈಗೆ ತಲಪುವಂತೆ ಮಾಡುವುದೇ ಪುಸ್ತಕೋದ್ಯಮದ ಪ್ರಾಥಮಿಕ ಆಶಯ.

ಈ ಉದ್ಯಮವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ, ಕಾಲಕಾಲಕ್ಕೆ ಬದಲಾಗುತ್ತಿರುವ ಓದುಗರ ಅಭಿರುಚಿಗೆ ಸ್ಪಂದಿಸುತ್ತ, ಆ ಕ್ಷೇತ್ರದಲ್ಲಿ ಬಹುವೇಗವಾಗಿ ಸಾಗುತ್ತಿರುವ ಪ್ರಕಾಶಕರ ನಡುವೆ ಕನ್ನಡ ಸರಸ್ವತಿಯ ಆರಾಧನೆ ಮಾಡುತ್ತಿದ್ದೇವೆಂದು ಭಾವಿಸುವುದರ ಜೊತೆಗೆ ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾಗುವುದೇ ಜೀವಂತಿಕೆಯ ಲಕ್ಷಣ ಎಂದು ಕನ್ನಡ ಸಾಹಿತ್ಯ ಪರಿಷತ್ತು ಪರಿಗಣಿಸಿದೆ.

**ಪುಂಡಲೀಕ ಹಾಲಂಬಿ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು





# ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೫೬೦೦೧೮

ರೂ. ೨೦/-